# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 294 (292) |
| ಸದಸ್ಯರ ಹೆಸರು | ಶ್ರೀ ಕೆ ಟಿ ಶ್ರೀಕಂಠೇಗೌಡ |
| ಉತ್ತರಿಸುವ ದಿನಾಂಕ | 03-02-2021 |
| ಉತ್ತರಿಸುವವರು | ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ: 141 ರಿ.ಸ.ನಂ: 141/4ರಲ್ಲಿ ಶ್ರೀ ತಿರುಮಲ ರಂಗನಾಥ ಸ್ವಾಮಿಯವರ ದೇವಸ್ಥಾನಕ್ಕೆ ಸೇರಿದ ಜಾಗವನ್ನು ಒತ್ತುವರಿ ಮಾಡಿಕೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹಾಸನ ಜಿಲ್ಲೆ, ಆಲೂರು ತಾಲ್ಲೂಕು, ಆಲೂರು ಗ್ರಾಮದ ಸರ್ವೆ ನಂ:141 ರಿ.ಸ.ನಂ:141/4ರಲ್ಲಿ ಶ್ರೀ ತಿರುಮಲ ರಂಗನಾಥ ಸ್ವಾಮಿ ದೇವಾಲಯದ ಜಾಗವು ಒತ್ತುವರಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆ. |
| ಆ) | ಬಂದಿದ್ದಲ್ಲಿ, ಒತ್ತುವರಿ ಆಗಿರುವ ಜಾಗ ಎಷ್ಟು; ಒತ್ತುವರಿದಾರರು ಯಾರು; | ಆಲೂರು ತಾಲ್ಲೂಕು, ಆಲೂರು ಗ್ರಾಮದ ಸರ್ವೇ ನಂ: 141/4ರಲ್ಲಿನ 0.23ಗುಂಟೆ ಜಾಗವನ್ನು ಅಕ್ಕಪಕ್ಕದ ಹಿಡುವಳಿದಾರರು ಒತ್ತುವರಿ ಮಾಡಿರುತ್ತಾರೆ. |
| ಇ) | ಒತ್ತುವರಿ ಆಗಿರುವ ಜಾಗವನ್ನು ಸರ್ವೆ ಮಾಡಿ, ಅಳತೆ ಮಾಡಿ ಕಲ್ಲುಕಂಬಗಳನ್ನು ನೆಟ್ಟಿದ್ದು ಯಾವಾಗ; | ದಿನಾಂಕ: 07-06-2019ರಂದು ಒತ್ತುವರಿ ಜಾಗವನ್ನು ಸರ್ವೇ ಮಾಡಿ ಗಡಿ ಗುರುತು ಮಾಡಲಾಗಿದ್ದು, ಕಲ್ಲುಕಂಬಗಳನ್ನು ನೆಟ್ಟಿರುವುದಿಲ್ಲ. |
| ಈ) | ಅಳತೆ ಮಾಡಿ ಕಲ್ಲುಕಂಬಗಳನ್ನು ನೆಟ್ಟಿದ್ದರೂ ಈವರೆಗೆ ಒತ್ತುವರಿ ಪ್ರದೇಶವನ್ನು ತೆರವುಗೊಳಿಸಿ ದೇವಸ್ಥಾನಕ್ಕೆ ಹಸ್ತಾಂತರಿಸದೇ ಇರಲು ಕಾರಣಗಳೇನು ಸದರಿ ಒತ್ತುವರಿ ಪ್ರದೇಶವನ್ನು ತೆರವುಗೊಳಿಸಿ ದೇವಸ್ಥಾನಕ್ಕೆ ಎಷ್ಟು ದಿನಗಳಲ್ಲಿ ಹಸ್ತಾಂತರಿಸಲಾಗುವುದು? | ದಿನಾಂಕ: 25-06-2019ರಂದು ಗ್ರಾಮಸ್ಥರ ಸಮ್ಮುಖದಲ್ಲಿ ಒತ್ತುವರಿ ಜಾಗವನ್ನು ತೆರವುಗೊಳಿಸಿ ತಹಶೀಲ್ದಾರ್ ರವರು ತಮ್ಮ ಸುಪರ್ದಿಗೆ ಪಡೆದುಕೊಂಡಿರುತ್ತಾರೆ. |

ಸಂಖ್ಯೆ: ಕಂಇ 26 ಮುಸಪ್ರ 2021

(ಕೋಟಾ ಶ್ರೀನಿವಾಸ ಪೂಜಾರಿ)
ಹಿಂದೂ ಧಾರ್ಮಿಕ ಮತ್ತು ಧರ್ಮಾದಾಯ ದತ್ತಿ
ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.